## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **868** |
| ವಿಧಾನ ಪರಿಷತ್ ಸದಸ್ಯರ ಹೆಸರು | : | ಶ್ರೀ ಕೆ.ಎ ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸುವವರು | : | ಮಾನ್ಯ ಸಣ್ಣ ಕೈಗಾರಿಕೆ ಹಾಗೂ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಸಚಿವರು |
| ಉತ್ತರಿಸಬೇಕಾದ ದಿನಾಂಕ | : | 09.03.2021 |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಜಾಗೃತಿಯ ಕೊರತೆಯಿಂದಾಗಿ ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಉದ್ಯಮಗಳ (ಎಂಎಸ್ಎಂಇ) ಯೋಜನೆಗಳ ಪ್ರಯೋಜನಗಳು ಸಾಮಾನ್ಯ ಜನರಿಗೆ ತಲುಪುತ್ತಿಲ್ಲದ ಪರಿಣಾಮವಾಗಿ ಬಜೆಟ್‌ನಲ್ಲಿ ಹಂಚಿಕೆಯಾದ ಅನುದಾನವನ್ನು ಸರಿಯಾಗಿ ಬಳಕೆ ಮಾಡುವ ಕ್ರಮಗಳನ್ನು ಸರ್ಕಾರ ತೆಗೆದುಕೊಂಡಿದೆಯೇ; | ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಉದ್ಯಮಗಳ (ಎಂ.ಎಸ್.ಎಂ.ಇ) ಯೋಜನೆಗಳ ಪ್ರಯೋಜನಗಳು ಸಾಮಾನ್ಯ ಜನರಿಗೆ ಪರಿಣಾಮವಾಗಿ ತಲುಪುವಂತಾಗಲು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯು ಉದ್ದಿಮೆದಾರರ ಜಾಗೃತಿ ಕಾರ್ಯಕ್ರಮಗಳನ್ನು ಜಿಲ್ಲಾ ಕೈಗಾರಿಕಾ ಕೇಂದ್ರಗಳ ಮೂಲಕ ಕೈಗಾರಿಕಾ ಸಂಘಗಳ ಸಹಯೋಗದೊಂದಿಗೆ ನಡೆಸಲಾಗುತ್ತಿದೆ. ಆ ಮೂಲಕ ಬಜೆಟ್‌ನಲ್ಲಿ ಹಂಚಿಕೆಯಾದ ಅನುದಾನವನ್ನು ಸರಿಯಾಗಿ ಬಳಕೆ ಮಾಡಲು ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ. |
| (ಆ) | ಸಣ್ಣ ಉದ್ಯಮಿಗಳ ವ್ಯವಹಾರವನ್ನು ಹೆಚ್ಚಿಸಲು ಸರ್ಕಾರವು ತನ್ನ ಯೋಜನೆಗಳ ಬಗ್ಗೆ ಜಾಗೃತಿ ಮೂಡಿಸಲು ಕ್ರಮಗಳನ್ನು ಕೈಗೊಂಡಿದೆಯೇ; (ವಿವರ ನೀಡುವುದು) | ಕರ್ನಾಟಕ ಸರ್ಕಾರವು ಹೊಸ ಕೈಗಾರಿಕಾ ನೀತಿ 2020-25 ನ್ನು ಜಾರಿಗೆ ತಂದಿರುತ್ತದೆ. ಸಣ್ಣ ಉದ್ಯಮಿಗಳ ವ್ಯವಹಾರವನ್ನು ಹೆಚ್ಚಿಸುವ ನಿಟ್ಟಿನಲ್ಲಿ ಸರ್ಕಾರವು ತನ್ನ ಯೋಜನೆಗಳ ಬಗ್ಗೆ ಜಾಗೃತಿ ಮೂಡಿಸಲು ರಾಜ್ಯಾದ್ಯಂತ ಕರ್ನಾಟಕ ಸಣ್ಣ ಕೈಗಾರಿಕೆಗಳ ಸಂಘದ ಮೂಲಕ ಪ್ರತಿ ಜಿಲ್ಲೆಯಲ್ಲಿ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು 2020-25 ನೇ ಸಾಲಿನಲ್ಲಿ ಈಗಾಗಲೇ ಜರುಗಿಸಲಾದ ಕಾರ್ಯಕ್ರಮಗಳ ವಿವರಗಳು ಈ ಕೆಳಗಿನಂತಿವೆ:- (ಕೋಷ್ಟಕ ಕೆಳಗೆ) |
| ಇ) | ಇಲ್ಲವಾದಲ್ಲಿ, ಅದಕ್ಕೆ ಕಾರಣಗಳೇನು; | ಅನ್ವಯಿಸುವುದಿಲ್ಲ. |

| ಕ್ರಸಂ | ಜಿಲ್ಲೆ | ಜಾಗೃತಿ ಕಾರ್ಯಕ್ರಮ ನಡೆಸಲಾದ ದಿನಾಂಕ |
|---|---|---|
| 1 | ಹಾಸನ | 26.08.2020 |
| 2 | ಉಡುಪಿ | 29.08.2020 |
| 3 | ಮೈಸೂರು | 08.09.2020 |
| 4 | ಶಿವಮೊಗ್ಗ | 19.09.2020 |
| 5 | ಸಿರಸಿ | 30.11.2020 |
| 6 | ಬೀದರ್ | 19.01.2021 |
| 7 | ಕಲಬುರುಗಿ | 20.01.2021 |
| 8 | ಹುಬ್ಬಳ್ಳಿ | 13.02.2021 |
| 9 | ದಾವಣಗೆರೆ | 13.02.2021 |
| 10 | ಯಾದಗಿರಿ | 19.02.2021 |

| | | |
|---|---|---|
| ಈ) | ಕಳೆದ ಐದು ವರ್ಷಗಳಲ್ಲಿ ಮತ್ತು ಪ್ರಸ್ತುತ ವರ್ಷದಲ್ಲಿ ಹಂಚಿಕೆ ಮಾಡಲಾದ ಅನುದಾನದಲ್ಲಿ ಖರ್ಚು ಮಾಡಲಾದ ಹಣವೆಷ್ಟು? | ಕಳೆದ ಐದು ವರ್ಷಗಳಲ್ಲಿ ಮತ್ತು ಪ್ರಸ್ತುತ ವರ್ಷದಲ್ಲಿ ಹಂಚಿಕೆ ಮಾಡಲಾದ ಅನುದಾನದಲ್ಲಿ ಖರ್ಚು ಮಾಡಲಾದ ವಿವರಗಳು ಈ ಕೆಳಗಿನಂತಿವೆ:– |

| ಅವಧಿ | ಹಂಚಿಕೆ ಮಾಡಲಾದ ಅನುದಾನ ರೂ.ಲಕ್ಷಗಳಲ್ಲಿ | ವೆಚ್ಚ ಮಾಡಲಾದ ಅನುದಾನ ರೂ.ಲಕ್ಷಗಳಲ್ಲಿ |
|---|---|---|
| 2015–16 | 13066.62 | 13027.48 |
| 2016–17 | 13877.38 | 13877.38 |
| 2017–18 | 19128.00 | 18936.53 |
| 2018–19 | 34114.42 | 31826.77 |
| 2019–20 | 52087.51 | 51906.34 |
| 2020–21 | 15953.75 | 15618.62 |

ಸಿಐ 30 ಎಸ್ಎಸ್ಐ 2021

(ಸಿ.ಸಿ ಪಾಟೀಲ್)
ಸಣ್ಣ ಕೈಗಾರಿಕೆ ಹಾಗೂ ವಾರ್ತಾ ಮತ್ತು
ಸಾರ್ವಜನಿಕ ಸಂಪರ್ಕ ಸಚಿವರು